ಒಂದಾಣೆ ಮಾಲೆ 220

# ಶ್ರೀ ಕೈಲಾಸ-ಮಾನಸಸರೋವರ ಯಾತ್ರೆ (ಭಾಗ ೧)



ಶ್ರೀ ದ್ವಾರಕಾ ಜಗದ್ಗುರುಗಳವರ
ಕೈಲಾಸ—ಮಾನಸಸರೋವರ ಯಾತ್ರೆಯ ವಿವರಣೆ

ಲೇಖಕ: ಯಂ. ವೆಂಕಟಾಚಲ ಭಟ್ಟ.

1959 ಬೆಲೆ: ಆಣೆ ಒಂದು.

ಒಂದಾಣೆ ಮಾಲೆ, ಮಂಗಳೂರು.

**ಶ್ರೀ ಕೈಲಾಸ ಪರ್ವತ.** **ಮಾನಸ ಸರೋವರದಲ್ಲಿ ಸ್ನಾನಸಂಕಲ್ಪ.**



ಪೂರ್ವ ದಿಕ್ಕಿನ ನೋಟ.

ಎಡದಿಂದ ಎರಡನೆಯವರು ಈ ಪುಸ್ತಕದ ಲೇಖಕ ಶ್ರೀ। ವೆಂಕಟಾಚಲ ಭಟ್ಟರವರು.
ಮೂರನೆಯವರು ಶ್ರೀ ಶ್ರೀ ಜಗದ್ಗುರುಗಳವರು.

# ಮೊದಲ ಮಾತು

ಅಖಿಲ ಭಾರತದಲ್ಲಿರುವ ಪವಿತ್ರ ಯಾತ್ರಾಸ್ಥಳಗಳಾದ ಸಪ್ತಪುರಿ, ಚತುರ್ಧಾಮ, ದ್ವಾದಶಿ ಜ್ಯೋತಿರ್ಲಿಂಗಗಳು ಮತ್ತು ೬೪ ಶಕ್ತಿಪೀಠಗಳಲ್ಲದೆ ಉಳಿದ ಎಲ್ಲಾ ಗಂಗಾಸಾಗರ, ಅಸ್ಸಾಮಿನ ಕಾಮಾಖ್ಯ ಇತ್ಯಾದಿ ಸಮಸ್ತ ತೀರ್ಥಯಾತ್ರೆಗಳನ್ನು ಮಾಡಿದ ಶ್ರೀ ದ್ವಾರಕಾ ಜಗದ್ಗುರುಗಳವರು ತಮ ಕೊನೆಯದಾದ ಹಾಗೂ ಮುಖ್ಯವಾದ ಕೈಲಾಸ-ಮಾನಸ ಸರೋವರ್ ಯಾತ್ರೆಯನ್ನು ಇದೇ ಕಳೆದ ೧೯೫೮ನೇ ಜುಲೈ-ಅಗಸ್ಟ್ ತಿಂಗಳಲ್ಲಿ ನಡೆಸಿದ ವಿವರವನ್ನು ಕನ್ನಡಿಗರ ಮುಂದೆ ಚಿಕ್ಕ ಪುಸ್ತಕರೂಪದಲ್ಲಿಡಲು ಸಂತೋಷ ಪಡುತ್ತೇನೆ.

ಆದ್ಯ ಜಗದ್ಗುರು ಶಂಕರಾಚಾರ್ಯರವರು ಈ ಯಾತ್ರೆಗೆ ಹೋಗಿ ಬಂದ ಕಾಲದಿಂದ ಈ ವರೆಗೆ ಅವರ ನಾಲ್ಕು ಪೀಠಗಳ ಯಾವ ಗುರುಗಳವರೂ ಹೋಗಿರಲಿಲ್ಲ. ಅಲ್ಲದೆ ಆ ಕಾಲದಿಂದ ಪ್ರತಿ ಶ್ರಾವಣಮಾಸದಲ್ಲಿ ಕೈಲಾಸ ಪ್ರದೇಶದಲ್ಲಿ ಜಾತ್ರೆ ನಡೆದು ಬರುತ್ತಾ ಇದೆ. ಆಷಾಢ ಶ್ರಾವಣ ಮಾಸದಲ್ಲಿ ಯಾದರೂ ಈ ಮಹಾಯಾತ್ರೆಗೆ ಸಾಧುಸಂತರೂ, ಸ್ವಾಮಿಗಳವರೂ ಹೋಗಿಬರುತ್ತಿರುವ ಪದ್ಧತಿಯು ನಡೆದುಬರುತ್ತಾ ಇದೆ.

ಸಮಸ್ತ ಆಸ್ತಿಕರೂ ಈ ಕಿರಿ ಹೊತ್ತಿಗೆಯಿಂದ ಪ್ರಯೋಜನ ಹೊಂದಿ, ಉತ್ತೇಜಿತರಾಗಿ, ಈ ಮಹಾಯಾತ್ರೆಯಲ್ಲಿ ಭಾಗಿಗಳಾಗುವಂತಾಗಲೆಂದೇ ನನ್ನ ಉದ್ದೇಶ. ಭಕ್ತಿ-ಶ್ರದ್ಧೆಯೇ ಈ ಪುಸ್ತಕದ ಬೆಲೆ. ಇನ್ನೂ ವಿವರ ವನ್ನಪೇಕ್ಷಿಸುವವರು ಅಗತ್ಯ ಪತ್ರವ್ಯವಹಾರ ಮಾಡಬಹುದು.

ಇತಿ,

ಎಂ. ವೆಂಕಟಾಚಲ ಭಟ್ಟ,

ಏಜಂಟ್,

ಶ್ರೀ ದ್ವಾರಕಾ ಜಗದ್ಗುರು ಸಂಸ್ಥಾನಂ

▪▪▪▪▪▪▪▪▪

# ಶ್ರೀ

# ಕೈಲಾಸ-ಮಾನಸ ಸರೋವರ ಯಾತ್ರೆ

## ಭಾಗ ೧

ವಿಳಂಬಿ ಸಂವತ್ಸರದ ಜೇಷ್ಠ ಶುದ್ಧ ೫ ಯು ಶುಕ್ರವಾರ ತಾರೀಕು ೨೩—೬—೧೯೫೮, ನಮ್ಮ ಪಾಲಿನ ಪವಿತ್ರ ದಿನ. ಅಂದು ಮುಂಜಾನೆ ಶ್ರೀ ದ್ವಾರಕಾ ಜಗದ್ಗುರು ಸಂಸ್ಥಾನ, ಮುಳಬಾಗಿಲು ಶ್ರೀ ಕೃಷ್ಣಾನಂದ ಮಠದಿಂದ, ಶ್ರೀ ಜಗದ್ಗುರುಗಳವರು ಅಖಿಲ ಭಾರತದ ಯಾತ್ರೆಗಳಲ್ಲಿ ಏಕಮೇವ ಸಂದರ್ಶಿಸಲ್ಪಡದಿದ್ದ ಸರ್ವಶ್ರೇಷ್ಠ ಹಾಗೂ ದುರ್ಗಮವಾದ ಕೈಲಾಸ ಹಾಗೂ ಮಾನಸ ಸರೋವರಗಳ ಪವಿತ್ರ ಯಾತ್ರೆಗಾಗಿ ಮಿತ ಪರಿವಾರದೊಡನೆ ಶುಭಮುಹೂರ್ತದಲ್ಲಿ ಪ್ರಯಾಣ ಬೆಳೆಸಿ, ಅಂದೇ ಬೆಳಿಗ್ಗೆ ೧೦-೩೦ಕ್ಕೆ ಹೆಳವನಕಟ್ಟೆ ಅಥವಾ ಕೊಮಾರನಹಳ್ಳಿಗೆ ದಯಮಾಡಿಸಲು, ಶ್ರೀಮಠದ ಶಿಷ್ಯರೂ, ಭಕ್ತಾದಿಗಳೂ ಹಾಗೂ ಪುರಪ್ರಮುಖರೂ ಭವ್ಯ ಸ್ವಾಗತದಿಂದ ಶ್ರೀಗಳವರನ್ನು ಸತ್ಕರಿಸಿ, ತಮ್ಮ ಗುರುಭಕ್ತಿಯನ್ನು ಅತ್ಯಂತ ಶ್ರದ್ಧೆಯಿಂದ ವ್ಯಕ್ತಪಡಿಸಿದರು. ಶ್ರೀ ಶ್ರೀಗಳವರು ಅಲ್ಲಿಂದ ೨೪-೬-೫೮ ರಂದು ಹೊರಟು ಹುಬ್ಬಳ್ಳಿ, ದತ್ತಾತ್ರೇಯ ಪೀಠವಾದ ಪ್ರಸಿದ್ಧ ಯಾತ್ರಾ ಸ್ಥಳವಾದ ವಾಡಿ, ಪಂಢರಪುರ, ಪೂನಾ ನಗರಗಳಲ್ಲಿ ಒಂದೊಂದು ದಿನ ಇದ್ದು, ೨೭ - ೬—೧೯೫೮ರಂದು ಬೊಂಬಾಯಿಗೆ ಆಗಮಿಸಿದರು. ಭಾರತದ ಮಹಾನಗರದ ಜನತೆಯು ಜಗದ್ಗುರುಗಳವರನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿತು. ಅತ್ಯಂತ ವೈಭವದಿಂದ ನಗರದ ರಾಜರಸ್ತೆಗಳಲ್ಲಿ ಸಡಗರದ ಮೆರೆವಣಿಗೆಯಾಯಿತು. ತಾ. ೧೯—೭—೫೮ರಂದು ಸಂಜೆ ಪಂಜಾಬ್ ಮೆಯಿಲ್‌ನಲ್ಲಿ ಹೊರಟು ೨೦ಕ್ಕೆ ಆಗ್ರಾ ನಗರವನ್ನು ತಲಪಿ, ಜಗತ್ಪ್ರಸಿದ್ಧವಾದ ತಾಜ್‌ಮಹಲನ್ನು ಸಂದರ್ಶಿಸಿ, ತಾ. ೨೧ಕ್ಕೆ ಬರೇಲಿ ಮುಖಾಂತರ ಸಂಜೆ ೫-೩೦ಕ್ಕೆ ಉತ್ತರಪ್ರದೇಶ ಸರಕಾರದ ಬೇಸಿಗೆಯ ರಾಜಧಾನಿಯಾದ ನೈನೀತಾಲವನ್ನು ತಲುಪಿದೆವು. ಶ್ರೀ ಗೀತಾಸತ್ಸಂಗ ಕೈಲಾಸ ಕ್ಷೇತ್ರದ ಅಧಿಷ್ಠಾತೃಗಳಾದ ಕನ್ನಡಿಗರಾದ ಶ್ರೀ ವಿದ್ಯಾನಂದ ಸರಸ್ವತೀ ಸ್ವಾಮಿಗಳವರ ನೇತೃತ್ವದಲ್ಲಿ ನೈನೀತಾಲದ ಜನತೆ ಕಡೆಯಿಂದಲೂ ಮತ್ತು ರಾಜ್ಯಪಾಲರಾದ ಶ್ರೀ| ವಿ. ವಿ. ಗಿರಿಯವರ ಕಡೆಯಿಂದಲೂ ಭವ್ಯ ಸ್ವಾಗತ

ನಡೆದು, ನಗರದ ಮುಖ್ಯ ಬೀದಿಯಲ್ಲಿ ಮೆರವಣಿಗೆಯಾಗಿ, ಶ್ರೀ ಶ್ರೀಗಳ ವರು ಶ್ರೀ ವಿದ್ಯಾನಂದರವರ ಆಶ್ರಮದಲ್ಲಿ ಬಿಡಾರಮಾಡಿದರು.

ನೈನೀತಾಲವು ಉತ್ತರಪ್ರದೇಶ ಸರಕಾರದ ಬೇಸಿಗೆಯ ರಾಜಧಾನಿ. ಸಮುದ್ರಮಟ್ಟದಿಂದ ೬೫೦೦ ಅಡಿ ಎತ್ತರವಾಗಿದೆ. ಹವೆ, ಬೇಸಿಗೆಯಲ್ಲಿ ತಂಪಾಗಿದ್ದು ತುಂಬಾ ಹಿತಕರವಾಗಿರುತ್ತದೆ. ಊರಿನ ಮಧ್ಯದಲ್ಲಿ ವಿಶಾಲ ವಾದ ಹಾಗೂ ತಿಳಿನೀರಿನಿಂದ ಸದಾ ತುಂಬಿರುವ ಸರೋವರವಿದೆ. ನೀರಿನ ಆಳ ಕೆಲವು ಕಡೆ ೯೦ ಅಡಿ ಇದೆ. ನೂರಾರು 'ಷಿಕಾರಿ'ಯಂತಹ ಬೋಟುಗಳು ಯಾತ್ರಿಗಳನ್ನು ಆಕರ್ಷಿಸುತ್ತವೆ. ಈ ಸರೋವರದಲ್ಲಿ ಬಟ್ಟೆ ಒಗೆಯಲು ಅವಕಾಶವಿಲ್ಲ. ಈ ಸರೋವರವು ಆಯತಾಕಾರವಾಗಿದ್ದು ಅದರ ಸುತ್ತಳತೆ ಸುಮಾರು ೩ ಮೈಲು ಇರುತ್ತದೆ. ಇದಕ್ಕೆ ಸುತ್ತಲೂ ಉತ್ತಮವಾದ ರಸ್ತೆ ಇದೆ. ವಿಹಾರಿಗಳು ಸಂಜೆ ಇದರ ಸುತ್ತು ಕುದುರೆಸವಾರಿ ಮಾಡುತ್ತಾರೆ. ನೈನೀತಾಲವು ಪರ್ವತೀಯ ದೊಡ್ಡ ಪಟ್ಟಣವೇ ಸರಿ. ಇಲ್ಲಿ ಆಧುನಿಕ ಸೌಲಭ್ಯಗಳಿಗೆ ಏನೂ ಕೊರತೆ ಇಲ್ಲ. ಕಾರಣ ಬ್ರಿಟಿಷರ ಕಾಲದಿಂದಲೂ ಮಾನ್ಯತೆಯನ್ನು ಪಡೆದು ಅಭಿವೃದ್ಧಿಗೆ ಬಂದ ದೊಡ್ಡ ಪಟ್ಟಣ. ಈ ಊರಿನ ಮಧ್ಯ ಇರುವ ಸರೋವರ, ಹಾಗೂ ಸುತ್ತಲೂ ಇರುವ ಗಗನ ಚುಂಬಿಗಳಾದ ಪರ್ವತಗಳು, ಇದಕ್ಕೆ ಶ್ರೇಷ್ಠತೆಯನ್ನು ತಂದಿವೆ. ವನ ವಿಹಾರಕ್ಕೆ ಅತ್ಯುತ್ತಮ ಸನ್ನಿವೇಶವಿದೆ. ಚೈನಾ ಪೀಕ್, ಟರ್ಫಟಾಪ್, Snow View Land's End ಮುಂತಾದುವು ಸ್ವಲ್ಪ ದೂರದಲ್ಲಿರುವ ಉತ್ತಮವಾದ ದರ್ಶನೀಯ ಸ್ಥಳಗಳು. ಬೇಸಿಗೆಯಲ್ಲಿ ಚೈನಾ ಪೀಕಿನಿಂದ ಕೈಲಾಸ ಪರ್ವತಸ್ತೋಮವು ತೋರಿಬರುವುದೆಂದು ಹೇಳುತ್ತಾರೆ. ಟರ್ಫ ಟಾಪಿನ ಎದುರಿಗೆ ವಿಶಾಲವಾದ ರಾಜಭವನ (ಗವರ್ನರರ ಮನೆ) ಇದೆ. ರಾಜಭವನದ ಸುತ್ತಲೂ ಇರುವ ಉದ್ಯಾನವನದ ಸುತ್ತಳತೆ ೩೦೦ ಎಕರೆ! ಪ್ರತಿ ಭಾನುವಾರ ಈ ಉದ್ಯಾನದಲ್ಲಿ ವಿಹರಿಸಲು ಪ್ರಜೆಗಳಿಗೆ ಅವಕಾಶವಿದೆ. ವಿವಿಧವಾದ, ಅಪೂರ್ವವಾದ ಫಲಪುಷ್ಪ ವೃಕ್ಷಗಳಿಂದ ಈ ಉದ್ಯಾನವನವು ಕಂಗೊಳಿಸುತ್ತದೆ. ಮಧ್ಯದಲ್ಲಿ ರಾಜ್ಯಭವನ. ಇದರ ವರ್ಣನೆ ಎಷ್ಟು ಮಾಡಿದರೂ ಸ್ವಲ್ಪವೇ. ಒಟ್ಟಿನಲ್ಲಿ 'ಪುಣ್ಯವಂತರ' ಬೀಡು.

ನೈನೀತಾಲದಲ್ಲಿ ಬೇಕಾದ ಎಲ್ಲಾ ಸಾಮಾನು ವಗೈರೆ ಸಿಕ್ಕಿದರೂ ಬೆಲೆ ತುಂಬಾ ಜಾಸ್ತಿ. ಕೈಲಾಸ ಯಾತ್ರಿಕರಿಗೆ ಒಂದು ಸೂಚನೆ ಏನೆಂದರೆ

ಯಾತ್ರಿಗೆ ಬೇಕಾಗುವ ಸ್ವೆ, ರೈನ್‌ಕೋಟು, ಮೋಜಾಗಬಟು ಬಟ್ಟೆ, ಟಾರ್ಚಲ್ ಎಲ್ಲವನ್ನೂ ಬೊಂಬಾಯಿಯಿಂದಲೇ ತರುವುದುತ್ತಮ. ಇಲ್ಲಿ ಸಿಗುವುದಿಲ್ಲ.

ಸರೋವರದ ಉತ್ತರದ ಕೊನೆಯಲ್ಲಿ ನೈನಾದೇವಿ ಮಂದಿರವಿದೆ. ಮಂದಿರದ ಪಕ್ಕದಲ್ಲಿ ವಿಶಾಲವಾದ ಕ್ರೀಡಾಂಗಣವಿದೆ. ಸಾರ್ವಜನಿಕ ಸಭೆ, ಭಾಷಣ ಇತ್ಯಾದಿ ಎಲ್ಲಾ Public Functionsಗಳು ಈ ಸ್ಥಳದಲ್ಲೇ ನಡೆಯುತ್ತವೆ. ಈ ಸ್ಥಳದಲ್ಲೇ ತಾ. ೨೩—೬—೧೯೫೪ರಂದು ಬಹಿರಂಗ ಸನ್ಮಾನ ಸಭೆ ನಡೆದು ಶ್ರೀ ಶ್ರೀ ಜಗದ್ಗುರುಗಳವರಿಗೆ ಈ ಕೆಳಕಂಡ ಸಂಸ್ಥೆಗಳಿಂದ, ಭಾರತದ ಹೋಂ ಮಿನಿಸ್ಟರ್ ಶ್ರೀ। ಗೋವಿಂದ ವಲ್ಲಭ ಪಂತ್ ಹಾಗೂ ಉತ್ತರಪ್ರದೇಶ ಮುಖ್ಯಮಂತ್ರಿಗಳಾದ ಶ್ರೀ। ಡಾಕ್ಟರ್ ಸಂಪೂರ್ಣಾನಂದ ಮುಂತಾದ ಮುಖಂಡರ ನೇತೃತ್ವದಲ್ಲಿ ಮಾನಪತ್ರವು ಅರ್ಪಿಸಲ್ಪಟ್ಟಿತು. ಸಹಸ್ರಾರು ಮಂದಿ ಪ್ರೇಕ್ಷಕರು ಭಾಗವಹಿಸಿದ್ದರು. ಶ್ರೀ ಜಗದ್ಗುರುಗಳವರ ಉಜ್ವಲ ಭಾಷಣದಿಂದ ಸರ್ವರೂ ಆನಂದಿತರಾದರು. ಮಾನಪತ್ರವಿತ್ತ ಸಂಸ್ಥೆಗಳು:—ನಗರಪಾಲಕ, ನೈನೀತಾಲ. (೨) ಶ್ರೀ ನಯನಾದೇವೀ ಮಂದಿರ ಟ್ರಸ್ಟ್ ಸಮಿತಿ. (೩) ಶ್ರೀ ಬದ್ರೀನಾಥ-ಕೇದಾರನಾಥ ಮಂದಿರ ಕಮಿಟಿ. (೪) ರಾಮಲೀಲಾ ಕಮಿಟಿ, ತಲ್ಲೀತಾಲ, (೫) ಶ್ರೀ ರಾಮಲೀಲಾ ಕಮಿಟಿ, ಮಲ್ಲಿತಾಲ. (೬) ಶ್ರೀ ಹರಿಸಂಕೀರ್ತನ ಸಭಾ, (೭) ಶ್ರೀ ಗೀತಾಸತ್ಸಂಗ ಕೈಲಾಸ ಕ್ಷೇತ್ರ. (೮) ಶ್ರೀ ಶಾರದಾ ಸಂಘ. (೯) ಶಾರದಾ ಮಂಡಲ, ಮಹಿಳಾ ವಿಭಾಗ. (೧೦) ಚೇತರಾಮ ಶಾಹ ಉಚ್ಚತರ ಮಾಧ್ಯಮಿಕ ವಿದ್ಯಾಲಯ. (೧೧) C. R. S. T. ಪೂರ್ವ ಛಾತ್ರ ಸಂಘ. (೧೨) ವೇದಾಂತ ಪ್ರಚಾರ ಮಂಡಲ ಮತ್ತು (೧೩) ಆರ್ಯಸಮಾಜ ಮುಂತಾದವುಗಳು.

ಇನ್ನು ನೈನೀತಾಲಕ್ಕೆ ಬರುವ ಪ್ರೇಕ್ಷಕರಿಗಿರುವ ಏಕೈಕ ಹಾಗೂ ದೊಡ್ಡ ತೊಂದರೆಯೆಂದರೆ, ಮುನಿಸಿಪಾಲಿಟಿಯವರು ವಿಧಿಸುವ ವಿವಿಧವಾದ 'ಮೊಗಲಾಯ್ ದರ್ಬಾರಿ'ಗಳನ್ನು ಹೋಲುವ ವಿವಿಧ ತೆರಿಗೆ. ಒಮ್ಮೆ ನಗರಕ್ಕೆ ಬಂದು ಪುನಃ ಹೊರಕ್ಕೆ ಹೋಗಿಬರುವ ಪ್ರತಿಯೊಬ್ಬನ ಮೇಲೆ ೨೪ ಗಂಟೆಗಳೊಳಗಾಗಿ ಹಿಂತಿರುಗುವವನ ಮೇಲೆ ೦—೪—೦ ಆಣೆ; ಮೀರಿದರೆ ೧-೦೦ ತೆರಿಗೆ. ನಂತರ ಊರೊಳಗೆ ಸಂಚರಿಸಬಯಸುವ ವಾಹನ

ಗಳಿಗೆ ತಲಾ ಬೆಳಿಗ್ಗೆ ೬-೦೦ ಗಂಟೆಯಿಂದ ಸಂಜೆ ೪-೦೦ ವರೆಗೆ ದಿನ ೧ಕ್ಕೆ ೨೦-೦೦ ರೂ. ಈ ರೀತಿ ತೆರಿಗೆ ತೆತ್ತರೂ ೩ ಸಾರಿ ತಿರುಗಾಡಿಸಬಹುದು. ಪುನಃ ತಿರುಗಿದರೆ ಪುನಃ Tax ತೆರಬೇಕು! ಹೇಗಿದೆ ತೆರಿಗೆ ವೈಖರಿ?

ಇದು ಬ್ರಿಟಿಷರ ಕಾಲದಿಂದ ಬಂದಿರುವ ವ್ಯಾಧಿ! ಭಾರತವು ಸ್ವತಂತ್ರವಾಗಿ, ಪ್ರಜಾರಾಜ್ಯ ಬಂದು ಇಷ್ಟು ದಿನಗಳಾದರೂ ಈ ವಿಚಿತ್ರ ಪರಿಸ್ಥಿತಿಯನ್ನು ಭಾರತದ ಮುಂದಾಳುಗಳು ಹದಗೊಳಿಸದಿರುವುದು ಶೋಚನೀಯವೇ ಸರಿ! ಇನ್ನಾದರೂ ಉತ್ತರಪ್ರದೇಶ ಸರಕಾರದವರಿಗೆ ಈ ಪರಕೀಯರ ಅನುಸರಣೆ ಮನೋಭಾವವು ತೊಲಗಿ, ಪ್ರಜೆಗಳ ಹಿತದೃಷ್ಟಿಯಿಂದ ಈ ತೆರಿಗೆ ಪದ್ಧತಿಯನ್ನು ಮಿತಗೊಳಿಸುವಂತಾಗಲಿ. ಭಾರತದ ಭಾಗಭಾಗಗಳಿಂದ ವಿಹಾರಕ್ಕೆಂದು ತಮ್ಮ ತಮ್ಮ ಉತ್ತಮೋತ್ತಮವಾದ ಕಾರುಗಳಲ್ಲಿ ನೈನೀತಾಲದ ವರೆಗೆ ದೂರದೂರದಿಂದ ಬಂದು ಇಲ್ಲಿಯ ತೆರಿಗೆ ಭಾರವನ್ನು ಹೊರಲಾರದೆ ಊರ ಬಾಗಿಲ ಸರೋವರದ ದಂಡೆಯಲ್ಲಿ ಸಾಲುಸಾಲಾಗಿ ಮಳೆ, ಗಾಳಿ, ಬಿಸಿಲೆನ್ನದೆ ನಿಲ್ಲಿಸಿರುವ ವಾಹನಗಳನ್ನು ನೋಡಿದರೆ ಮನವು ಸಂತಾಪಗೊಳುತ್ತದೆ

ಶ್ರೀ ಶ್ರೀ ಜಗದ್ಗುರುಗಳವರು, ಮೊದಲೇ ಈ ತೆರಿಗೆ ಭಾರದಿಂದ ಅನುಭವಹೊಂದಿದ್ದು, ಮಾನಸತ್ರ ಸಭೆಯ ಕಾಲದಲ್ಲಿ ತಮ್ಮ ದೀರ್ಘವಾದ ಭಾಷಣದಲ್ಲಿ ಜನತೆಯ ಕಷ್ಟವನ್ನು ಸರಕಾರದ ಗಮನಕ್ಕೆ ತಂದು ಈ ಬಗ್ಗೆ ಉಚಿತ ವ್ಯವಸ್ಥೆ ಅತ್ಯಗತ್ಯವೆಂದೂ, ಹೀಗಿದ್ದರೆ ಭಾರತದಂತಹ ಗಣ್ಯ ಪ್ರಜಾರಾಜ್ಯ (ನಾಗರಿಕ ರಾಜ್ಯಕ್ಕೆ) ಅಪಮಾನವೆಂದೂ ತಿಳಿಸಿದರು. ಸಹಸ್ರಾರು ಮಂದಿ ಹರ್ಷೋದ್ಗಾರದಿಂದ, ಕರತಾಡನಗಳೊಂದಿಗೆ ಸಮರ್ಥಿಸಿದರು.

ಶ್ರೀ ಶ್ರೀ ಜಗದ್ಗುರುಗಳವರು ತಾ. ೨೬—೬—೫೮ ಏಕಾದಶಿಯಂದು ೮೬ ಮೈಲು ದೂರದಲ್ಲಿರುವ ಪ್ರಾಚೀನವಾದ (ಪಾಂಡವರಿಂದ ನಿರ್ಮಿತವಾದುದೆಂದು ಪ್ರತೀತಿ) ಜಾಗೇಶ್ವರ ಎಂಬಲ್ಲಿಗೆ ಮಿತ ಪರಿವಾರದೊಂದಿಗೆ ದಯಮಾಡಿಸಿ, ಆಲ್ಮೋರಾ, ರಾಣಿಖೇತ ಮುಖಾಂತರ ಅದೇ ಸಂಜೆ ಮರಳಿದರು.

ಕೈಲಾಸ ಯಾತ್ರೆಗೆ ಉತ್ಸುಕರಾದ ಯಾತ್ರಿಗಳು ಬರತೊಡಗಿದರು. ಶ್ರೀ ಶ್ರೀ ಜಗದ್ಗುರುಗಳವರ ಪಾರ್ಟಿಯಲ್ಲಿ (೧) ಪಂ. ಜಿ. ಆರ್. ಮಹಾಬಲ

ಭಟ್ಟರು. (೨) ಎಂ. ವೆಂಕಟಾಚಲ ಭಟ್ಟರು. (೩) ಬೆಂಗಳೂರು ಟಿ. ಎಸ್. ಎಸ್. ಮಣಿಯಂ. (೪) ಪರಿಚಾರಕ ಟಿ. ರಾಮಕೃಷ್ಣ ಉಡುಪ. (೫) ಕೃಷ್ಣ ಐತಾಳ—ಹೀಗೆ ಆರು ಮಂದಿಯೂ (ಶ್ರೀಗಳವರು ಸೇರಿ); ಶ್ರೀ ಗೀತಾಸತ್ಸಂಗ ಕೈಲಾಸ ಕ್ಷೇತ್ರದ ಕಡೆಯಿಂದ (೧) ಸಂಚಾಲಕರಾದ ಶ್ರೀ ವಿದ್ಯಾನಂದ ಸರಸ್ವತಿಗಳವರು. (೨) ಬೊಂಬಾಯಿಂದ ಸೇರಿರಾದ ಜಮುನಾದಾಸ್ ಸಾಹ ಮತ್ತು ೩ ಮಂದಿ ಪಾರ್ಟಿ (ಇಬ್ಬರು ಮಹಿಳೆಯರು) (೩) ಬರೇಲಿಯ ಕಪೂರ, ಶ್ರೀ| ತೋತರಾಮ ಮತ್ತು ಅವರ ಪತ್ನಿ; ಇನ್ನೊಬ್ಬ ಮಹಿಳೆ, ಅಲ್ಮೋರಾದ ಭವಾನಿಶಂಕರ, ಬೊಂಬಾಯಿಯ ಪ್ರಸಿದ್ಧ ವಕೀಲರಾದ ಸಿ. ಸಿ. ದಿವಾಣಜಿ, ಹೈದರಾಬಾದಿನ ಶ್ರೀ| ರಾಮಕೃಷ್ಣ ಮತ್ತು ಬೊಂಬಾಯಿಯ ಬಚ್ಚೂಭ್ಯಾ—ಮುಂತಾದ ೧೬ ಮಂದಿ, ಹೀಗೆ ಒಟ್ಟು ಯಾತ್ರಿಗಳು ೨೨ ಮಂದಿ ಇದ್ದರು.

ತಾ. ೧-೭-೧೯೫೮ನೇ ಹೇವಿಳಂಬಿ ಸಂ|ರದ ಆಷಾಢ ಶುದ್ಧ ಪೂರ್ಣಿಮಾ. ಈ ದಿನ, ಗುರು ಪೂರ್ಣಿಮಾ ಪ್ರಯುಕ್ತ ಶ್ರೀ ಶ್ರೀ ಜಗದ್ಗುರುಗಳವರೂ ಯಥಾವಿಧಿಯಾಗಿ ವ್ಯಾಸ ನಾರಾಯಣ ಪೂಜೆಯನ್ನು ಮಾಡಿದರು. ಗುರುಪೂಜಾ ಕಾಲದಲ್ಲಿ ಗವರ್ನರರ ಕಾರ್ಯದರ್ಶಿಗಳಾದ ಹಾಸನದ ನಾಗಪ್ಪನವರು ಹಾಜರಿದ್ದು ಗವರ್ನರರ ಪರವಾಗಿ ೧೦೮ ರೂ. ಗುರುಕಾಣಿಕೆಯನ್ನು ಸಮರ್ಪಿಸಿದರು. ಅನಂತರ ಸನಾತನೀ ಪ್ರಜೆಗಳಿಂದ ಗುರುಪೂಜೆ ನಡೆಯಿತು.

ತಾ. ೨—೭—೫೮ರಂದು ಗವರ್ನರರಾದ ಶ್ರೀ| ವಿ. ವಿ. ಗಿರಿ ಮತ್ತು ಶ್ರೀಮತಿ ಗಿರಿಯವರು ಶ್ರೀ ಜಗದ್ಗುರುಗಳವರನ್ನು ರಾಜಭವನಕ್ಕೆ ಆಹ್ವಾನಿಸಿ ಗೌರವಿಸಿದರು; ಊರ ಪ್ರಮುಖರೆಲ್ಲಾ ನೆರೆದಿದ್ದರು. ಆ ಸಭೆಯಲ್ಲಿ ಜಗದ್ಗುರುಗಳವರ ಭಾಷಣ ನಡೆಯಿತು.

ತಾ. ೩—೭—೫೮ರಂದು (ಹೇವಿಳಂಬಿ ಸಂ|ರದ ಆಷಾಢ ಬಹುಳ ದ್ವಿತೀಯಾ ಗುರುವಾರ) ಶುಭಮುಹೂರ್ತದಲ್ಲಿ ಶ್ರೀ ಶ್ರೀ ಜಗದ್ಗುರುಗಳವರು, ಶ್ರೀ ಶ್ರೀ ವಿದ್ಯಾನಂದ ಸರಸ್ವತಿಗಳೊಡನೆ ನಿಶ್ಚಿತ ಪರಿವಾರದೊಂದಿಗೆ ಸ್ಪೆಶಲ್ ಬಸ್ಸಿನಲ್ಲಿ ಕೈಲಾಸ ಹಾಗೂ ಮಾನಸ ಸರೋವರ ಯಾತ್ರಾನಿಮಿತ್ತವಾಗಿ ಪ್ರಸ್ಥಾನಮಾಡಿದರು. ಬಹುಮಂದಿ ಬಸ್‌ಸ್ಟ್ಯಾಂಡಿನಲ್ಲಿ ಹಾಜರಿದ್ದು ಸರ್ವ ಯಾತ್ರಿಗಳಿಗೂ 'ಸುಖ-ಪ್ರಯಾಣ' ಕೋರಿದರು.

ಪರ್ವತ ಮಾರ್ಗದಲ್ಲಿ ಸಂಚರಿಸುತ್ತಾ ಸಂಜೆಗೆ ೧೦ಲ ಮೈಲು ದೂರದ ಬಾಗೇಶ್ವರಕ್ಕೆ ತಲ್ಪಿದೆವು.

೧೯೩೭ರಲ್ಲಿ ನಮ್ಮ ಮೈಸೂರು ಮಹಾರಾಜರವರಾದ ಶ್ರೀ| ಕೃಷ್ಣ ರಾಜೇಂದ್ರ ಒಡೆಯರ್‌ರವರು ಹೋಗಿಬಂದ ಗರ್ಭ್ಯಾಂಗ್, ಲಿಪುಲೇಖ್ ಘಾಟಿಯ ಮುಖಾಂತರವೇ ಯಾತ್ರೆ ಮಾಡಿಬರಲು ನಿಶ್ಚಿತವಾಗಿತ್ತು. ಈ ಬಾಗೇಶ್ವರದಿಂದ ಉಂಟಾಧುರ್ ಘಾಟಿ, ಮಿಲಂ ಮೂಲಕ ಹೋಗುವ ಬೇರೊಂದು ದಾರಿಯೂ ಇದೆ. ಈ ದಾರಿಯು ತುಂಬಾ ಕಠಿಣವಾಗಿದ್ದುದರಿಂದ ಲಿಪುಲೇಖ್ ಮಾರ್ಗವನ್ನೇ ನಿಶ್ಚಯಿಸಲಾಗಿತ್ತು. ಬಾಗೇಶ್ವರದಲ್ಲಿ ಸರಕಾರಿ (Dist. Board) ಬಂಗಲೆಯಲ್ಲಿ ಉಳಿದುಕೊಂಡೆವು. ಇಲ್ಲಿ ರಾತ್ರಿ ೧ಕ್ಕೆ ತಲಾ ೩ ರೂ. ತೆಗೆದುಕೊಳ್ಳುತ್ತಾರೆ. ಇಲ್ಲಿ ಟಪ್ಪಾಲು ತಂತಿ ಆಫೀಸು ಮತ್ತು ದೊಡ್ಡ ಪೇಟೆಯೂ ಇದೆ. ರಾತ್ರಿ, ಭಜನೆ ಹಾಗೂ ಶ್ರೀ ಶ್ರೀ ಜಗದ್ಗುರುಗಳವರ ಉಪನ್ಯಾಸವಾಯಿತು.

ತಾ. ೪—೭—೫೪ರಂದು ಸೌರಾಷ್ಟ್ರದ ಜಾಮನಗರದ ಮಹಾರಾಜರವರ ಇಚ್ಛೆಯಂತೆ, ಭಾಗೇಶ್ವರಕ್ಕೆ ಸಮೀಪ(೬ ಮೈಲಿ)ದಲ್ಲಿರುವ ದೇವಲ್ ಥಾರ್ ಎಸ್ಟೇಟಿಗೆ ಶ್ರೀ ಶ್ರೀಗಳವರು ಭೇಟಿಕೊಟ್ಟರು. ಇದು ಜಾಮನಗರಕ್ಕೆ ಸೇರಿದೆ. ಇಲ್ಲಿಯ ಅಧಿಕಾರಿಯು ಆದರದಿಂದ ಸತ್ಕರಿಸಿದರು. ಸಂಜೆ ೪-೦೦ ಗಂಟೆ ವರೆಗೆ ಇಲ್ಲಿಯ ರಾಜನಿವಾಸದಲ್ಲಿದ್ದು ರಾತ್ರಿ ೭-೩೦ಗೆ ತಿರುಗಿ ಬಾಗೇಶ್ವರಕ್ಕೆ ಬಂದೆವು.

ಮಾರನೆ ದಿನ, ತಾ. ೫—೭—೫೪, ವಿಳಂಬಿ ಸಂ|ರದ ಆಷಾಢ ಬ| ಚೌತಿ ಸ್ಥಿರವಾರ ಬೆಳಿಗ್ಗೆ ಸರಯೂ ನದಿಯಲ್ಲಿ ಸ್ನಾನಮಾಡಿ, ಬಾಗೇಶ್ವರನ ದರ್ಶನ ಪೂಜೆ ಪೂರಯಿಸಿಕೊಂಡು, ಶುಭಮುಹೂರ್ತದಲ್ಲಿ ಬಸ್ಸಿನಲ್ಲಿ ಹೊರಟು ಪರ್ವತೀಯ ಮಾರ್ಗದಲ್ಲಿ ಪ್ರಯಾಣಮಾಡಿ ಮಧ್ಯಾಹ್ನ ೨-೦೦ಗೆ ಚಕೋರಿ ಎಂಬಲ್ಲಿಗೆ ತಲುಪಿದೆವು. ಇಲ್ಲಿಂದ ಮುಂದೆ ಕಾಲ್ನಡಿಗೆಗೆ ಆರಂಭ. ಶ್ರೀ ಶ್ರೀ ಜಗದ್ಗುರುಗಳವರೂ, ಸರ್ಕಾರದಿಂದ ಏರ್ಪಾಡಾಗಿದ್ದ ಜೀಪ್‌ನಲ್ಲಿ ಥಲ್ ಎಂಬಲ್ಲಿಗೆ ಹೊರಟರು. ಉಳಿದ ಪರಿವಾರದವರು ಕಾಲ್ನಡಿಗೆಯಲ್ಲಿ ಮೊದಲನೆಯ ದಿನವಾದ್ದರಿಂದ ಪ್ರಯಾಸದಿಂದಲೇ ೧೦ ಮೈಲು ನಡೆದು ಸಂಜೆ ೪-೦೦ಕ್ಕೆ ಥಲ್ ಗ್ರಾಮಕ್ಕೆ ಸೇರಿ ರಾತ್ರಿ ಅಲ್ಲಿಯ ಪಾಠಶಾಲೆಯಲ್ಲಿ ಉಳಿದುಕೊಂಡರು. ಥಲ್‌ನಿಂದ ಕಾಲ್ನಡಿಗೆ ಶುರುವಾಗು

ತ್ತದೆ. ತಾ. ೬—೭—೫೯ರಂದು ಥಲ್‌ನಿಂದ ಹೊರಟು ೩ ಮೈಲು ಉಬ್ಬಿನ ದಾರಿಯನ್ನೂ ೨ ಮೈಲು ಸಾಮಾನ್ಯ ಕಾಡುದಾರಿಯನ್ನೂ ಕ್ರಮಿಸಿ ೪ ಮೈಲು ರೋಡಿನಲ್ಲಿ ನಡೆದು ಡೀಡೀಹಾಟ್ ಎಂಬಲ್ಲಿಗೆ ಸಂಜೆ ತಲ್ಪಿದೆವು. ದಾರಿಯಲ್ಲಿ ಜಿಗಳೆಯ ಕಾಟ ಚೆನ್ನಾಗಿತ್ತು. ಇಲ್ಲಿಂದ ಆಸ್ಕೋಟ್, ಔಲ್ಘಾ ಬಿತವಾಘಾಟ್, ಬಾಲವಾಕೋಟ್, ಕಾಲ್ಕಾ ಮಾರ್ಗವಾಗಿ ತಾ. ೧೦-೭-೫೯ಕ್ಕೆ ಧಾರ್ಚೂಲಾಕ್ಕೆ ತಲ್ಪಿ, ಬಂಗಲೆಯಲ್ಲಿ ಮೊಕ್ಕಾಂ ಮಾಡಿದೆವು. ಇಲ್ಲಿಂದ ಮುಂದೆ ಮಾರ್ಗವು ಬಹಳ ಕಡಿದಾದುದು. ಸಾಮಾನು ಸರಂಜಾಮುಗಳೆಲ್ಲಾ ಕೂಲಿಗಳ ಮುಖಾಂತರವೇ ಸಾಗಬೇಕು. ಇಲ್ಲಿಂದ ನಮ್ಮೊಡನೆ ಬಂದಿದ್ದ ಕೂಲಿಗಳು, ಕುದುರೆ ಎಲ್ಲಾ ಹಿಂತಿರುಗಿದವು. ಇಲ್ಲಿ ಟಪ್ಪಾಲು ತಂತಿ ಆಫೀಸಿದೆ. ಬೇಕಾದ ಸಾಮಾನುಗಳೆಲ್ಲಾ ಸ್ವಲ್ಪ ಜಾಸ್ತಿ ಬೆಲೆಯಾದರೂ ಸಿಕ್ಕುತ್ತದೆ. ಇಲ್ಲಿಯೇ ಕಾಳಿನದಿಯನ್ನು ಹಗ್ಗದ ಸೇತುವೆಯ ಮೇಲೆ ದಾಟಿ ನೇಪಾಳ ರಾಜ್ಯಕ್ಕೆ ಹೋಗುವ ದಾರಿ ಇದೆ.

ತಾ. ೧೧—೭—೫೮ರಂದು ಬೆಳಿಗ್ಗೆ ೮-೩ಂಗೆ ಧಾರ್ಚೂಲಾದಿಂದ ಹೊರಟು ಹಿಂದಿನ ದಿನದ ಮಳೆಯಿಂದ ದಾರಿಯೆಲ್ಲಾ ಕುಸಿದು ಬಿದ್ದು ತೀರಾ ಕೆಟ್ಟಿದ್ದರೂ, ನೇರವಾದ ೨—೨॥ ಮೈಲು ಉಬ್ಬಿನ ದಾರಿ ನಡೆದು ಏಲಾ ಮಾರ್ಗವಾಗಿ ೧೩ ಮೈಲಿ ಬಂದು ತವಾಘಾಟ್ ತಲ್ಪಿದೆವು. ಚಿಕ್ಕ ಊರು.

ತಾ. ೧೨—೭—೫೮ ಸೂಸಾ ಎಂಬಲ್ಲಿ ಮಧ್ಯಾಹ್ನ ಕಳೆದು ೧೫ ಮೈಲು ಬಲು ಕಠಿಣವಾದ ರಸ್ತೆ ನಡೆದು ರಾತ್ರಿ ಸಿರ್ಖಾ ಎಂಬಲ್ಲಿ ಮೊಕ್ಕಾಂ ಮಾಡಿದೆವು. ಸೂಸಾದಿಂದ ೨॥ ಮೈಲು ದೂರದಲ್ಲಿ ನಾರಾಯಣಾಶ್ರಮವೆಂಬ, ಯಾತ್ರಿಕರು ಅಗತ್ಯ ನೋಡಬೇಕಾದ ಸ್ಥಳವಿದೆ. ದಕ್ಷಿಣ ಭಾರತದ ಶ್ರೀ ನಾರಾಯಣ ಸ್ವಾಮಿಗಳೆಂಬವರು ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಿದ ಆಶ್ರಮ. ಶ್ರೀ ನಾರಾಯಣಸ್ವಾಮಿಗಳು ಸಮಾಧಿಸ್ಥರಾಗಿದ್ದರೂ ಮೈಸೂರಿಗರೊಬ್ಬರ ಮೇಲ್ನಿಗಾದಲ್ಲಿದೆ. ಇಲ್ಲಿಯ ಶ್ರೀ ಸೂರ್ಯನಾರಾಯಣ ಮಂದಿರ ಮತ್ತು ಉದ್ಯಾನವನ ಅತ್ಯಂತ ರಮಣೀಯವಾಗಿದೆ ಎಂದು ಸ್ಥಳೀಯರಿಂದ ತಿಳಿದುಬಂದಿತು.

ತಾ. ೧೩—೭—೫೮ರಂದು ಸಿರ್ಖಾದಿಂದ ಕಾಡುಮಾರ್ಗದಲ್ಲಿ ಹೊರಟು ೧೨ ಮೈಲು ಕ್ರಮಿಸಿ ಜಿಪ್ತಿ ಎಂಬಲ್ಲಿ ತಂಗಿದೆವು. ದಾರಿಯಲ್ಲಿ ಕರಡಿಗಳ ಭಯವಿದೆ.




ಶ್ರೀ ಶ್ರೀ ಜಗದ್ಗುರುಗಳವರು ಕೈಲಾಸ–ಮಾನಸ ಸರೋವರ ಯಾತ್ರೆಗೆ ಹೋಗಿಬಂದ ದಾರಿಯನ್ನೂ, ▪ ಮುಖ್ಯ ಸ್ಥಳಗಳನ್ನೂ, ಈ ನಕಾಶೆಯಲ್ಲಿ ತೋರಿಸಲಾಗಿದೆ.

ತಾ. ೧೪—೭—೫೮ರಂದು ಜಿಪ್ತಿಯಿಂದ ೮ ಮೈಲು ನಡೆದು ಮಾಲ್ಪಾ, ಬುದಿ ಮುಖಾಂತರ ೧೫ರ ಸಂಜೆ ಗರ್ಭ್ಯಾಂಗ್ ಎಂಬ ಭಾರತ ಕೊನೇ ಊರನ್ನು ತಲ್ಪಿದೆವು. ಇಲ್ಲಿ Post office ಇದೆ. ಊರು ದೊಡ್ಡದು. ಬೇಕಾದ ಸಾಮಾನುಗಳು ಸಿಕ್ಕುತ್ತವೆ. ಇಲ್ಲಿಯ ಪ್ರಸಿದ್ಧ ವರ್ತಕರಿಂದ ಶ್ರೀಮಾನ್ ಮೋಹನ ಸಿಂಗ್ ಬ್ರದರ್ಸ್ ಅವರು ಶ್ರೀ ಶ್ರೀಗಳವರ ಮೊಕ್ಕಾಂ ಬಗ್ಗೆ ಸುವ್ಯವಸ್ಥಿತವಾದ ಏರ್ಪಾಡು ಮಾಡಿದ್ದರು. ಜಗದ್ಗುರುಗಳವರ ಮೆರವಣಿಗೆ ಹಾಗೂ ಉಪನ್ಯಾಸವಾಯಿತು.

ತಾ. ೧೬—೭—೫೮ರಂದು ಗರ್ಭ್ಯಾಂಗಿನಲ್ಲೇ ವಾಸ. ಮುಂದಿನ ಪ್ರಯಾಣಕ್ಕಾಗಿ ಕುದುರೆಗಳು, ಚಮರೀ ಮೃಗಗಳು ಮತ್ತು ಕೂಲಿಗಳ ಏರ್ಪಾಡಾಗಿತ್ತು. ಈ ಊರಿನಲ್ಲಿ ನೀರಿಗೆ ತುಂಬಾ ಕಷ್ಟ. ಸ್ನಾನ ಮುಂತಾದುದಕ್ಕೆ ಮಳೆನೀರನ್ನೇ ಉಪಯೋಗಿಸಿದೆವು. ಈ ಊರು ಸಮುದ್ರಮಟ್ಟದಿಂದ ೧೦,೫೦೦ ಅಡಿ ಎತ್ತರದಲ್ಲಿದೆ. ಇಲ್ಲಿಂದ ಚಳಿಗೆ ಆರಂಭ. ಇಲ್ಲಿ ಭಾರತದ ಪೋಲೀಸ್ ಚೌಕಿ (Check-Post) ಇದೆ. ನೇಪಾಳ ಹಾಗೂ ಟಿಬೆಟ್‌ನಿಂದ ಬರುವವರನ್ನು ಪರೀಕ್ಷೆಮಾಡಿ ಭಾರತದ ಒಳಕ್ಕೆ ಬಿಡುತ್ತಾರೆ. ಗರ್ಭ್ಯಾಂಗ್ ಊರು ವರ್ಷೇ ವರ್ಷೇ ಕುಸಿಯುತ್ತಿರುವುದರಿಂದ ನಿವಾಸಿಗಳು ಬಹಳ ಭಯಭೀತರಾಗಿರುವುದಲ್ಲದೆ ಇದರ ನಿವಾರಣೆಗೆ ಭಾರತ ಸರ್ಕಾರಕ್ಕೆ ಸೂಕ್ತ ಸಲಹೆ ಕೊಡಬೇಕೆಂದು ಜಗದ್ಗುರುಗಳವರನ್ನು ಪ್ರಾರ್ಥಿಸಿದರು. ಮೊದಲು ನಾವು ಬಾಗೇಶ್ವರದಿಂದ ಹೊರಡುವಾಗ ಗರ್ಭ್ಯಾಂಗ್ ಲಿಪುಲೇಖ್ ಘಾಟಿಯ ಮುಖಾಂತರ ಯಾತ್ರೆಮಾಡಿ ಪುನಃ ಇದೇ ಮಾರ್ಗವಾಗಿ ತಿರುಗಿ ಬರುವ ಯೋಚನೆಮಾಡಿದ್ದೆವು. ಆದರೆ ಈ ಊರಿಗೆ ಬಂದ ಮೇಲೆ ಇಲ್ಲಿಯವರ ಸಲಹೆಯ ಮೇಲೂ ಹಾಗೂ ಉಂಟಾಧುರಾ ಜಯಂತಿ ಘಾಟಿ ಮೂಲಕ ಬಂದರೆ ಶಾಂಡಿಲ್ಯ ಕುಂಡ ಹಾಗೂ ನಂದಾದೇವಿ ಪರ್ವತ ದರ್ಶನವೂ ಹಾಗೂ ಜೋಹಾರ್ ಪ್ರಾಂತದ ನಿಸರ್ಗ ಸೌಂದರ್ಯದ ಅಲೌಕಿಕ ಅನುಭವವೂ ಉಂಟಾಗುವುದಾಗಿ ತಿಳಿದುಬಂದದ್ದರಿಂದ, ಕೈಲಾಸದಿಂದ ಹಿಂದಿರುಗುವಾಗ ಈ ಎರಡನೆಯ ಮಾರ್ಗವಾಗಿಯೇ ಬಾಗೇಶ್ವರ ತಲಪಲು ನಿಶ್ಚಯವಾಯಿತು.

ತಾ. ೧೮ರಂದು ೧೨ ಗಂಟೆಗೆ ಹೊರಟು ೧೦ ಮೈಲು ದೂರದ ಕಾಲಾಪಾನಿ ಎಂಬಲ್ಲಿಗೆ ೫-೩೦ಗೆ ತಲುಪಿದೆವು. ಇಲ್ಲಿಯೇ ಕಾಳೀನದಿ

ಹುಟ್ಟುವುದು. ಸಮುದ್ರಮಟ್ಟದಿಂದ ೧೪,೦೦೦ ಅಡಿ ಎತ್ತರವಾಗಿದೆ ತುಂಬಾ ಚಳಿ.

ಕಾಲಾಪಾನಿಯಿಂದ ೧೨ ಗಂಟೆಗೆ ಹೊರಟು ಷಂಗ್‌ಚಂ ಎಂಬಲ್ಲಿಗೆ ತಾ. ೧೯ಕ್ಕೆ ಬಂದೆವು. ಇಲ್ಲಿ ಭಾರೀ ಮಳೆ ಬಂದು ಗುಡಾರಗಳು ಹಳೆತಾದ್ದರಿಂದ ಸೋರುತ್ತಿತ್ತು. ಎತ್ತರ ೧೫,೦೦೦ ಅಡಿ.

ತಾ.೨೦ ಭಾನುವಾರ ಬೆಳಿಗ್ಗೆ ಷಂಗ್‌ಚಂನಿಂದ ಹೊರಟು ೧೬,೫೦೦ ಅಡಿ ಎತ್ತರದ ಲಿಪುಲೇಖ್ ಘಾಟಿಯನ್ನು ಬಹುಕಷ್ಟದಿಂದ ದಾಟಿ ಸಂಜೆ ೫ ಗಂಟೆಗೆ ಟಿಬೆಟ್ಟಿನ ಮೊದಲನೆಯ ಗ್ರಾಮವಾದ ತಾಕ್ಲಾ ಕೋಟೆಯನ್ನು ತಲ್ಪಿದೆವು. ಇಲ್ಲಿಯ ಮೈದಾನಗಳು ಬಹು ವಿಶಾಲವಾದವುಗಳು. ಹುಡುಕಿದರೂ ಒಂದು ಮರಗಿಡವೂ ಕಣ್ಣಿಗೆ ಬೀಳುವುದಿಲ್ಲ. ತಾಕ್ಲಾ ಕೋಟೆಗೆ ಒಂದು ಮೈಲು ದೂರವಿರುವಾಗಲೇ ಭಾರತ ಸರ್ಕಾರದಿಂದ ಆಜ್ಞಪ್ತರಾದ ಭಾರತ ಟ್ರೇಡ್ ಏಜಂಟ್ ಆಫೀಸಿನವರು ಶ್ರೀ ಶ್ರೀ ಜಗದ್ಗುರುಗಳವರನ್ನು ಕಂಡು, ಚೀಣಾದ ಪೋಲೀಸ್ ಚೌಕಿ ವಗೈರೆ ಯಾವ ತೊಂದರೆಯೂ ಆಗದಂತೆ ನೋಡಿಕೊಂಡರು. ತಾಕ್ಲಾ ಕೋಟೆಯಲ್ಲಿನ ಭಾರತದ ವ್ಯಾಪಾರಿಗಳು ಅದ್ಭುತ ಸ್ವಾಗತ ಬಯಸಿ, ಮೊಕ್ಕಾಂ ವ್ಯವಸ್ಥೆ ಮಾಡಿದರು.

ತಾಕ್ಲಾಕೋಟೆಯು ಕರ್ನಾಲೀ ದಡದಲ್ಲಿ ೧೩,೧೦೦ ಅಡಿ ಎತ್ತರದ ಮೇಲಿದೆ. ಇಲ್ಲಿ ಚೀನಾಸರ್ಕಾರದ ಅಧಿಕಾರಿಗಳೂ, ಮಿಲಿಟರಿಯೂ ಹಾಗೂ ಡೆಪ್ಟಿ ಕಮಿಷನರರೂ ಇರುತ್ತಾರೆ. ಇಲ್ಲಿಯ ಬೌದ್ಧವಿಹಾರ ಚೆನ್ನಾಗಿದೆ. ಅಲ್ಲಲ್ಲಿ ಕಲ್ಲುರಾಶಿಗಳನ್ನು ಮಾಡಿ "ಮಣಿ ಪದ್ಮೆ ಹುಂ" ಎಂದು ಬರೆದಿರುತ್ತಾರೆ. ಇಲ್ಲಿ ಪರ್ವತಗಳಲ್ಲೇ ಕೊರೆದು ಮನೆಮಾಡಿಕೊಂಡು ಬೌದ್ಧರು ವಾಸಿಸುತ್ತಾರೆ.

ಮಾರನೆಯ ದಿನ ಹೊರಡುವ ನಿಶ್ಚಯವಿದ್ದರೂ ಎಲ್ಲಾ ಯಾತ್ರಿಗಳಿಗೂ ನಾವು ಬಂದ ಹಿಂದಿನ ದಿನವೇ, ಟಿಬೆಟ್ಟಿನ ದರೋಡೆಕೋರರು ಚೈನಿಗಳ ಬೆಂಬಲದಿಂದ ಭಾರತೀಯರ ಅಂಗಡಿಗಳಿಂದ ಅಕ್ಕಿ ಹಿಟ್ಟು ಮುಂತಾದುವನ್ನು ವಶಪಡಿಸಿಕೊಂಡಿದ್ದಾರೆಂದೂ ಯಾತ್ರಿಕರನ್ನೂ ಪೀಡಿಸುವರೆಂದೂ ವರ್ತಮಾನ ಕೇಳಿ ಯೋಚನೆಗೀಡಾಗಿದ್ದರು. ಅನುಭವಸ್ಥರಿಂದ ಶ್ರೀ ವಿದ್ಯಾನಂದ ಸರಸ್ವತಿಗಳವರೇ ಯಾರೂ ಒಬ್ಬೊಬ್ಬರೇ ಮುಂದೆ ಹೋಗಕೂಡದೆಂದೂ, ಮೇಲ್ಗಡೆ ದುಡ್ಡು ಇಟ್ಟುಕೊಳ್ಳಕೂಡದೆಂದೂ ತಿಳಿಸಿದರು.

ಯಾತ್ರಿಕರು ತೋಳು ಸಂದಿ, ಕಾಲುಚೀಲದ ಮಡಿಕೆ, ಹಿಟ್ಟಿನ ಗಂಟು, ತಲೆ ದಿಂಬು ಮುಂತಾದವುಗಳಲ್ಲಿ ತಮ್ಮ ತಮ್ಮ ಹಣ ಮುಚ್ಚಿಟ್ಟು ರಕ್ಷಣೆಮಾಡಿ ಕೊಳ್ಳುತಿದ್ದರು. ಸಾಧಾರಣವಾಗಿ ಟಿಬೆಟ್ಟಿನ ಪ್ರದೇಶವು ೧೪,೦೦೦ ಅಡಿ ಎತ್ತರದಲ್ಲಿದ್ದುದರಿಂದ ಟಿಬೆಟ್ಟಿನ ಛಳಿ ಅದ್ಭುತ. ಇಂತಹ ಗಾಳಿ ಮತ್ತು ಛಳಿಯನ್ನು ನಾವು ಈ ಹಿಂದೆ ಎಲ್ಲೂ ಕಂಡಿರಲಿಲ್ಲ. ನೀರಿಗೂ ಬಹಳ ತೊಂದರೆ. ಟಿಬೆಟ್ಟಿನಲ್ಲಿ ಕಟ್ಟಿಗೆ ಎಂಬುದು ಇಲ್ಲವೇ ಇಲ್ಲ. ಎಲ್ಲೋ ದೂರದಲ್ಲಿ ಪೊದೆ ಪೊದೆಯಾಗಿ ಬೆಳೆಯುವ ಡಾವಮಾ ಮುಳ್ಳನ್ನು ಒಣಗಿಸಿ ಅಥವಾ ಹಸಿಯನ್ನೇ ಒಲೆಗೆ ಉಪಯೋಗಿಸುತ್ತಾರೆ. ಇಲ್ಲಿ ಭಾರತದ ನಾಣ್ಯ ಚಲಾವಣೆ ಇದೆ. ಕೆಲವು ಸಮಯ ಒಂದು ರೂಪಾಯಿಗೆ ಒಂದು ಹಿಡಿ ಮುಳ್ಳು ಕೊಡುತ್ತಾರೆ. ಇಲ್ಲಿ ಒಂದು ರೂ.ಗೆ ಒಂದು ಲೋಟ ಚಮರೀ ದನದ ಹಾಲು ಮತ್ತು ೧ ರೂ.ಗೆ ಉಣ್ಣೆಯ ಒಂದು ಜೊತೆ ಕೈಚೀಲ ಹಾಗೂ ಕಾಲುಚೀಲ ಸಿಗುತ್ತದೆ. ಯಾತ್ರಿಕರು ಬಂದ ವರ್ತಮಾನ ತಿಳಿದೊಡನೇ ಟಿಬೆಟಿನ ವಿಕಾರ ಸ್ತ್ರೀ ಪುರುಷರು ಭಿಕ್ಷೆ ಬೇಡಲು ಬರುತ್ತಾರೆ, ಹಾಗೂ ಕಾಡುತ್ತಾರೆ.

ತಾರೀಕು ೨೨—೭—೫೮ರಂದು ೧೧-೦೦ ಗಂಟೆಗೆ ತಾಕ್ಲಾ ಕೋಟೆಯನ್ನು ಬಿಟ್ಟು ಉರಿಬಿಸಿಲಿನಲ್ಲಿ ಸುಮಾರು ೮ ಮೈಲು ನಡೆದು ಸಂಜೆ ಘೌಲಿ ನದಿ ದಡದಲ್ಲಿ ಮೊಕ್ಕಾಂ ಹಾಕಿದೆವು. ಇಲ್ಲಿಯೂ ತುಂಬಾ ಚಳಿ. ಎತ್ತರ ೧೪,೦೦೦ ಅಡಿ.

ತಾ. ೨೩—೭—೫೮ರಂದು ೮ ಮೈಲಿನ ಗೋರಿ ಓಡ್ಯಾರ್ ಎಂಬಲ್ಲಿ ಮೊಕ್ಕಾಂ. ಇಲ್ಲಿಂದ ಮೊದಲನೆಯ ಬಾರಿಗೆ ಕೈಲಾಸ ಶಿಖರ ದರ್ಶನವಾಗುತ್ತದೆ. ನೀರಿಗೆ ತುಂಬಾ ಕಷ್ಟ. ಮುಂದೆ ಸುಮಾರು ಒಂದು ಮೈಲಿ ದೂರದಲ್ಲಿ ನೀರು ಇರುವ ಕಡೆ ಢೇರೆ ಹಾಕುವ ಇಚ್ಛೆ ಇದ್ದರೂ ತಿಬ್ಬತೀಯರ ಪ್ರಥಮ ಒರಟುತನದ ಅನುಭವದಿಂದ ನೀರಿಲ್ಲದ ಜಾಗದಲ್ಲೇ ಬೀಡು ಬಿಡಲಾಯಿತು. ಇಲ್ಲಿಯೂ ರಾತ್ರಿ ಮಳೆದೆಸೆಯಿಂದ ತುಂಬಾ ಕಷ್ಟ ಅನುಭವಿಸಬೇಕಾಯಿತು.

ಮಾರನೇ ದಿನ ೧೦ ಮೈಲು ಅತೀವ ಕಷ್ಟದ ದಾರಿಯಲ್ಲಿ ನಡೆದು ರಾಕ್ಷಸ ಸರೋವರದ ದಡದಲ್ಲಿ ಬೀಡು ಬಿಟ್ಟೆವು. ಸರೋವರವು ೨ ಮೈಲು ದೂರ. ಈ ರಾಕ್ಷಸಸರೋವರವು ರಾವಣನಿಗಾಗಿ ನಿರ್ಮಿತವಾದ್ದೆಂದು

ಪ್ರಸಿದ್ಧಿ ಇದೆ. ವಿಸ್ತಾರದಲ್ಲಿ ಮಾನಸಸರೋವರಕ್ಕಿಂತಲೂ ಇದು ಹೆಚ್ಚು. ನಡುವೆ ಒಂದು ಪರ್ವತವಿದ್ದು ಇನ್ನೊಂದು ಪಕ್ಕದಲ್ಲಿಯೇ ಪವಿತ್ರ ಮಾನಸ ಸರೋವರ ಇದೆ.

ತಾ. ೨೪—೭—೫೪ರಂದು ಗುರ್ಲಾ ಮಾಂಧಾತಾ ಪರ್ವತವನ್ನು ಕ್ರಮಿಸಿ ವಿಶಾಲತರವಾದ ಮರಳುಭೂಮಿಯಲ್ಲಿ ಸಂಜೆ ವರೆಗೆ ನಡೆದು ಪವಿತ್ರತಮವಾದ ಮಾನಸ ಸರೋವರದ ದಡದಲ್ಲಿ ಬೀಡುಬಿಟ್ಟೆವು. ಈ ದಿನದ ಪ್ರಯಾಣ ಬಹಳ ದೂರವಾದ್ದರಿಂದ ಯಾತ್ರಿಕರೆಲ್ಲರೂ ಬಹಳ ಹೊತ್ತಿನ ವರೆಗೂ ಬರುತ್ತಿದ್ದರು. ಈ ದಿನ ಬಿಸಿಲಿದ್ದು ವಾತಾವರಣವೂ ತುಂಬಾ ಚೆನ್ನಾಗಿದ್ದುದರಿಂದ ಯಾತ್ರಿಗಳೆಲ್ಲರೂ ಸಂಕಲ್ಪಮಾಡಿ ಮೊದಲನೇ ಬಾರಿ ಮಾನಸ ಸರೋವರದಲ್ಲಿ ಆನಂದದಿಂದ ಸ್ನಾನಮಾಡಿದರು. ಈ ಬೃಹತ್ ಸರೋವರವು ಆಯಾತಾಕಾರವಾಗಿದ್ದು ೫೪ ಮೈಲು ಸುತ್ತಳತೆ ಉಳ್ಳದ್ದಾಗಿದೆ. ನೀರು ಅತ್ಯಂತ ಶುಭ್ರವಾಗಿದೆ. ಯಾತ್ರಿಗಳ ಆನಂದಕ್ಕೆ ಪಾರವೇ ಇಲ್ಲ. ತಮ್ಮ ಯಾತ್ರಾ ಕಷ್ಟಗಳೆಲ್ಲವನ್ನೂ ಮರೆತು ಕೈಲಾಸಪತಿಯನ್ನು ಅನನ್ಯ ಭಕ್ತಿಯಿಂದ ಧ್ಯಾನಿಸುತ್ತಾ, ತಮ್ಮ ತಮ್ಮ ಪಿತೃಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಗಾಗಿಯೂ, ತಮ್ಮ ತಮ್ಮ ಸಕಲ ಪಾಪ ಪರಿಹಾರ ದ್ವಾರಾ ಮಹಾಪುಣ್ಯಪ್ರಾಪ್ತಿಗಾಗಿಯೂ ಸಕಲರೂ ಚಳಿಯನ್ನು ಗಮನಿಸದೇ ಸಾಧ್ಯವಿದ್ದಷ್ಟು ಹೊತ್ತು ಸ್ನಾನಮಾಡಿದರು.

ಮಾನಸ ಸರೋವರದ ಮಾಹಾತ್ಮ್ಯ ಹೀಗಿದೆ:—

ತತೋ ಗಚ್ಛೇತ ರಾಜೇಂದ್ರ ಮಾನಸಂ ತೀರ್ಥಮುತ್ತಮಂ ।
ತತ್ರಸ್ನಾತ್ವಾನರೋ ರಾಜನ್ ರುದ್ರ ಲೋಕೇ ಮಹೀಯತೇ ॥

ಮಹಾಭಾರತ ವನಪರ್ವ ೮೨.

ಪದ್ಮ ಪುರಾಣ ಆದಿ ಖಂಡ ೨೧ । ೮೬

ಕೈಲಾಸ ಪರ್ವತೇ ರಾಮ ಮನಸಾ ನಿರ್ಮಿತಂ ಪರಂ ।
ಬ್ರಹ್ಮಣಾಂ ನರಶಾರ್ದೂಲ ತೇನೇದಂ ಮಾನಸಂ ಸರಃ ॥

ವಾಲ್ಮೀಕಿ ರಾಮಾಯಣ—ಬಾಲಕಾಂಡ ೨೪-೮.

ಹಂಸಯೋರ್ದಂಪತೀ ಪೂರ್ವಂ ಮಾನಸಾಖ್ಯೆ ಸರೋವರೆ ।
ಸ್ಥಿತಾಪರಸ್ಪರಂ ಪ್ರೇಮ್ಣಾ ವಿಹಾರಂತೌ ನಿರಂತರಮ್ ॥

ಕೇದಾರ ಖಂಡ.

ಸರ್ವಧಾತುಮಯಸ್ತತ್ರ ಸುಮಹಾನ್ ವೈದ್ಯುತೋ ಗಿರಿಃ ||
ತಸ್ಯಪಾದೆಸರಃ ಪುಣ್ಯಂ ಮಾನಸಂ ಸಿದ್ಧಸೇವಿತವ್ ||

ವಾಯು—ಮತ್ಸ್ಯಪುರಾಣ.

ಶ್ರೀ ತುಲಸೀದಾಸ ರಾಮಾಯಣದಲ್ಲಿ ಮಾನಸ ಸರೋವರದ ವರ್ಣನೆ ಈ ರೀತಿ ಇದೆ:—

ಸಪ್ತ ಪ್ರಬಂಧ ಸುಭದ ಸೋಪಾನಾ |
ಗ್ಯಾನ ನಯನ ನಿರಖತ ಮನಮಾನಾ |
ರಘುಪತಿ ಮಹಿಮಾ ಅಗುನ ಅಬಾಧಾ |
ಬನರವ ಸೋಯಿಾ ಬರಬಾರಿ ಅಗಾಧಾ | ಇತ್ಯಾದಿ....

ಭಾವಾರ್ಥ:—ಪರಮಾತ್ಮನ ಲೀಲಾಮಾತ್ರದಿಂದ ನಿರ್ಮಿತವಾದ ಈ ಪುಣ್ಯತಮ ಸರೋವರದ ನಾಲ್ಕು ದಿಕ್ಕುಗಳಲ್ಲೂ ಸೋಪಾನಗಳಿವೆ; ಅದರಲ್ಲಿ ಅಮೃತತುಲ್ಯವಾದ ಸ್ವಚ್ಛ ಜಲರಾಶಿಯಿದೆ; ಈ ನೀರಿನಲ್ಲಿ ಬಹು ಬಣ್ಣದ ಕಮಲಪುಷ್ಪಗಳು ಬೆಳೆದಿವೆ; ರಾಜಹಂಸೇತ್ಯಾದಿ ಅನೇಕ ಪಕ್ಷಿ ವರ್ಗವೂ, ಜಲಚರಗಳೂ ವಾಸಿಸುತ್ತವೆ; ಶ್ರೀರಾಮನ ಭಕ್ತರಲ್ಲದವರಿಗೆ ಈ ಪವಿತ್ರತಮ ಸರೋವರದ ದರ್ಶನವೂ ಕಠಿಣವಾಗಿದೆ; ಈ ದುರ್ಗಮ ಹಾಗೂ ಯಕ್ಷಗಂಧರ್ವಾದಿ ಸಿದ್ಧಪುರುಷರಿಂದ ಸೇವಿಸಲ್ಪಡುವ ಪುಣ್ಯಪ್ರದ ಸರೋವರವು ಕೇವಲ ನಿಶ್ಚಿತಾಂತಃಕರಣವುಳ್ಳವರಿಗೂ ಪುಣ್ಯವಂತರಿಗೂ ಮಾತ್ರ ಅಭ್ಯುದಯವಾಗತಕ್ಕದ್ದು ಇತ್ಯಾದಿ.

ಅಲ್ಲದೇ ಈ ಕೆಳಗಿನಂತೆ ಮಾನಸಸರೋವರದ ವಿಚಾರದಲ್ಲಿ ವಿಶೇಷವಾದ ಭಾವನೆ ಮತ್ತು ಉಕ್ತಿ ಇದೆ:—

ಉತ್ತರೇ ಮಾನಸೇ ಸ್ನಾನಂ ಕುರ್ಯಾನಾತ್ಮವಿಶುದ್ಧಯೇ |
ಸೂರ್ಯಲೋಕಾದಿ ಸಂಸಿದ್ಧಿ ಸಿದ್ಧಯೇ ಪಿತೃಮುಕ್ತಯೇ ||
ಸ್ನಾತ್ವಾದತರ್ಪಣಂ ಕುರ್ಯಾತ್ ದೇವಾದೀನಾಂ ಯಥಾವಿಧಿ |
ಆ ಬ್ರಹ್ಮಸ್ತಂಬಪರ್ಯಂತಂ ದೇವರ್ಷಿ ಪಿತೃಮಾನವಾಃ |
ತೃಪ್ಯಂತು ಪಿತರಸ್ಸರ್ವೇ ಮಾತೃಮಾತಾ ಮಹಾದಯಃ |
ಶ್ರಾದ್ಧಂ ಸಪಿಂಡಕಂ ಕುರ್ಯಾತ್ಸ್ವಸೂತ್ರೋಕ್ತ ವಿಧಾನತಃ

ಅರ್ಥ:—ಉತ್ತರ ದಿಶಿಯಲ್ಲಿ ಹಿಮಾಲಯದಲ್ಲಿರುವ ಮಾನಸಸರೋವರದಲ್ಲಿ ಸ್ನಾನಮಾಡುವದರಿಂದ ಆತ್ಮಶುದ್ಧಿಯೂ ಸಕಲ ಪಾಪ ಪರಿಹಾ

ಕವೂ ಆಗಿ ಸೂರ್ಯಲೋಕಪ್ರಾಪ್ತಿಯೂ, ಮತ್ತು ಸ್ನಾನಾಂತರ ಯಥಾವಿಧಿಯಾಗಿ ದೇವ, ಋಷಿ, ಪಿತೃ ತರ್ಪಣಗಳನ್ನು ಕೊಟ್ಟು ಸ್ವಸೂತ್ರೋಕ್ತವಾಗಿ ಶ್ರಾದ್ಧಮಾಡಿ ಪಿಂಡಪ್ರದಾನ ಮಾಡುವುದರಿಂದ ಎಲ್ಲಾ ಪಿತೃಗಳಿಗೂ ಮುಕ್ತಿಯಾಗುವುದು.

ಹೀಗೆ ಮಾನಸ ಸರೋವರದ ಮಾಹಾತ್ಮ್ಯೆಯು ಬಹು ವಿಸ್ತೃತವಾಗಿ ವರ್ಣಿಸಲ್ಪಟ್ಟಿದೆ. ಇವುಗಳಲ್ಲಿ ಕೆಲವನ್ನು ಆರಿಸಿ ಕನ್ನಡಿಗರ ತಿಳುವಳಿಕೆಗೆ ಬರೆದಿರುತ್ತೇನೆ.

ಇದೆಲ್ಲವೂ ಪುರಾಣಕಾಲಿಕವಾದ ವರ್ಣನೆಗಳು. ಪ್ರಕೃತ ಮಾನಸ ಸರೋವರದಲ್ಲಿ ನಾವು ನೋಡಿದ ಘಟ ಸ್ಥಾನದಲ್ಲಿ ಮೆಟ್ಟಲುಗಳೂ, ಕಮಲ ಪುಷ್ಪಗಳೂ, ರಾಜಹಂಸಗಳೂ, ಮತ್ತು ರತ್ನಗಳೂ, ವಿಶೇಷವಾದ ವನೌಷಧಿಗಳೂ, ಒಂದೂ ತೋರದಿದ್ದರೂ, ಬಹು ದೂರದಿಂದ ನೂರಾರು ಮೈಲು ನಡೆದು ದಣಿದು, ದಾರಿಯ ಎಡರು ತೊಡರುಗಳನ್ನು ಅನುಭವಿಸಿ ಕೊಂಡು, ಬಳಲಿ ಬಂದ ಯಾತ್ರಿಕನಿಗೆ ಮಾಂಧಾತಾ ಪರ್ವತದ ಶಿಖರದಿಂದಲೇ ಆಗುವ ಈ ಮಹಾಸರೋವರದ ಪುಣ್ಯಜಲದರ್ಶನದಿಂದ ಉಂಟಾಗುವ ಅನುಭವಾತೀತವನ್ನು ವರ್ಣಿಸಲಸದಳವಲ್ಲ; ಯಾತ್ರಿಯು ತನ್ನ ಯಾತ್ರೆಯನ್ನೇ ಏಕೆ, ಜೀವನವನ್ನೇ ಸಫಲವಾಯಿತೆಂದುಕೊಳ್ಳುತ್ತಾನೆ. ಇನ್ನು ಸರೋವರವನ್ನು ಸಮೀಪಿಸುತ್ತಿದ್ದಂತೆಯೇ ಆ ಜಲರಾಶಿಯ ನೀಲಮ ವರ್ಣವೂ ಮಂದಮಾರುತದಿಂದೇಳುವ ತರಂಗಗಳೂ, ಜಲಮಧ್ಯದಲ್ಲಿ ಹಿಂಡುಹಿಂಡಾಗಿ ಸಂಚರಿಸುವ ಬಣ್ಣ ಬಣ್ಣದ ಜಲಚರ ಪಕ್ಷಿ ಸಮೂಹವೂ, ಪ್ರಶಾಂತ ವಾತಾವರಣವೂ ಕಣ್ಣಿಗೆ ಹಬ್ಬವನ್ನೇ ಉಂಟುಮಾಡಿ, ಭಾವನಾ ಪ್ರಪಂಚಕ್ಕೇ ಕೊಂಡೊಯ್ಯುತ್ತವೆ. ಅಲ್ಲಿಯ ನಿಸರ್ಗ ಸೌಂದರ್ಯವನ್ನಂತೂ ವರ್ಣಿಸಲು ಸಾಧ್ಯವೇ ಇಲ್ಲ. ಸಂಧ್ಯಾಸಮಯದಲ್ಲೂ, ಸೂರ್ಯೋದಯ ಕಾಲದಲ್ಲೂ ತತ್ರಾಪಿ ವಾತಾವರಣವು ಪರಿಶುದ್ಧವಾಗಿ, ಮೋಡ-ಗಾಳಿಗಳಿಲ್ಲದೆ ಉದಯಿಸುತ್ತಿರುವ ಸೂರ್ಯನಾರಾಯಣನ ಹೊಂಬಣ್ಣದ ಕಿರಣಗಳು ಬಲು ದೂರದಲ್ಲಿ ಎತ್ತರವಾಗಿ ಕಂಗೊಳಿಸುತ್ತಿರುವ ಹಿಮಾಚ್ಛಾದಿತವಾಗಿರುವ ಕೈಲಾಸಪರ್ವತದ ಮೇಲೆ ಬಿದ್ದು ಅದ್ಭುತ ಹಾಗೂ ಅಲೌಕಿಕ ಕಾಂತಿಯ ಛಾಯೆಯು ಈ ಮಹಾಸರೋವರದಲ್ಲಿ ಪ್ರತಿಬಿಂಬಿತವಾಗಿ ಕಾಣುವಾಗ ಉಂಟಾಗುವ ದೃಶ್ಯವು ಜಗತ್ತಿನ ಬೇರೆ ಯಾವ ಕಡೆಯು

ಲ್ಲಿಯೂ ಕಾಣಲಾರದೆಂದು ನಿಸ್ಸಂಶಯವಾಗಿ ಹೇಳಬಹುದು. ಇದು ಅನುಭವದಿಂದ ಮಾತ್ರ ತಿಳಿದುಕೊಳ್ಳಬಹುದೇ ವಿನಹಾ ಬೇರೆ ಇಲ್ಲ.

ಈ ಮಹಾ ಸರೋವರವು ೧೪,೯೫೦ ಅಡಿ ಎತ್ತರದಲ್ಲಿದೆ. ಪ್ರಪಂಚದ ಪವಿತ್ರ ವಿಶಾಲ ಸರೋವರಗಳಲ್ಲಿ ಒಂದು. ಪ್ರದಕ್ಷಿಣೆ ಬರಲು ೬೫ ಮೈಲು ಕಾಲು ದಾರಿ ಇದೆ. ಈ ಸರೋವರದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಬೌದ್ಧ ಮಠಗಳಿವೆ. ೩ ಅಥವಾ ೪ ದಿನಗಳಲ್ಲಿ ಮಳೆ ಗಾಳಿ ಇಲ್ಲದಿದ್ದರೆ ಪ್ರದಕ್ಷಿಣೆ ಮಾಡಬಹುದು. ಈ ಸರೋವರಕ್ಕೆ ಕೈಲಾಸ ಪರ್ವತದಿಂದ ಅನೇಕ ಝರಣಗಳು ಬಂದು ಸೇರುವುದರಿಂದಲೂ ಅಲ್ಲದೆ ಈ ಸರೋವರದಿಂದ ಅನೇಕ ನದಿಗಳು ಹರಿಯುವುದರಿಂದಲೂ ಈ ಪ್ರದಕ್ಷಿಣೆಯು ಬಹಳ ಕಠಿಣ ಸಾಧ್ಯವಾಗಿದೆ.

ತಾ. ೨೬—೭—೫೮ನೇ ವಿಳಂಬಿ ಸಂ|ರದ ಅಧಿಕ ಶ್ರಾವಣ ಶುದ್ಧ ಏಕಾದಶಿ ಶುಕ್ರವಾರದ ದಿನ ನಮ್ಮ ಜೀವನದಲ್ಲೇ ಪವಿತ್ರತಮವಾದ, ಎಂದೆಂದಿಗೂ ಮರೆಯಲಾಗದ ದಿನ. ಬೆಳಗಿನ ಜಾವ ಸೂರ್ಯೋದಯಕ್ಕೆ ಮುಂಚೆ, ಕಡು ಚಳಿಯಲ್ಲಿ ಎದ್ದು ಪ್ರಾತಃರ್ವಿಧಿಗಳನ್ನು ಪೂರೈಸಿ, ಸಮಸ್ತ ಯಾತ್ರಿಕರೂ ಶ್ರೀ ಶ್ರೀ ಜಗದ್ಗುರುಗಳವರ ಮುಂದಾಳುತ್ವದಲ್ಲಿ ಶ್ರೀ ಶ್ರೀ ಸ್ವಾಮೀ ವಿದ್ಯಾನಂದ ಸರಸ್ವತಿಗಳವರೊಡನೆ ಮಾನಸ ಸರೋವರದ ತಟಕ್ಕೆ ಬಂದು, ಆಚಮನಮಾಡಿ, ಮೊದಲು ಎಲ್ಲರೂ ಒಮ್ಮೆ ಮನಸ್ಸಿನಲ್ಲಿ ಕೈಲಾಸ ಪತಿಯನ್ನೇ ನೆನೆಯುತ್ತಾ ಸ್ನಾನಮಾಡಿ, ಶಾಸ್ತ್ರೋಕ್ತವಾಗಿ ಸಂಕಲ್ಪಮಾಡಿ, ಮಾನಸ ಸರಸ್ಸಿಗೆ ಶ್ರದ್ಧಾಪೂರ್ವಕವಾಗಿ ಪೂಜೆಯನ್ನು ಸಲ್ಲಿಸಿ, ಆನಂದವಾಗಿ ಸ್ನಾನಮಾಡಿದೆವು. ಅಂದಿನ ಆನಂದ ಹೇಳತೀರದು. ಸ್ನಾನವಾದ ನಂತರ ಕೈಕಾಲುಗಳು ನಮ್ಮ ಹತೋಟಿಯನ್ನು ಮೀರಿದ್ದವು. ಮಂತ್ರೋಚ್ಚಾರ ಮಾಡುವ ಬಾಯಿ ತೊದಲುತ್ತಿತ್ತು. ಅಂತೂ ಅದೇ ಸ್ಥಿತಿಯಲ್ಲಿ ಬೇರೆ ಉಣ್ಣೆ ವಸ್ತ್ರಗಳನ್ನು ಧರಿಸಿ, ನಿತ್ಯಕರ್ಮಗಳನ್ನು ಪೂರಯಿಸಿಕೊಂಡು ಬೆಳಗ್ಗೆ ೭-೩೦ಕ್ಕೆ ಡೇರೆಗೆ ಹಿಂದಿರುಗಿದೆವು. ಅಂದಿನ ಪಾನೀಯದ (ಟೀಯ) ರುಚಿ ಬೇರೆಂದೂ ಬಂದಿರಲಿಲ್ಲ.

**(ಈ ಪುಸ್ತಕದ ಜತೆಗೆ, ಇದರ ಉತ್ತರಾರ್ಧವಾದ ಪುಸ್ತಕ ನಂಬ್ರ 221ನ್ನೂ ಕೊಂಡುಕೊಳ್ಳಿರಿ.)**





ಶ್ರೀ ಶ್ರೀ ಜಗದ್ಗುರುಗಳವರು ಒಂದು ಜಲಪಾತದ ಹತ್ತಿರ.

Edited, Printed & Published by K. V. Shenoy
at The Prabhat Printers Ltd., Mangalcre.